# ಓದುವಿಕೆಯ ಬೆಳವಣಿಗೆ ಮತ್ತು ಅದರಲ್ಲಿನ ತೊಂದರೆಗಳು
## ರಾಜೇಶ್ ಕುಮಾರ್

ಹೆಚ್ಚಿನ ಓದಿಗಾಗಿ ಸಲಹೆಗಳು
ಓದುವಿಕೆಯ ಬೆಳವಣಿಗೆ ಮತ್ತು ಅದರಲ್ಲಿನ ತೊಂದರೆಗಳು
ಕೇನ್.ಕೆ (2010)
ಬಿಪಿಎಸ್ ಬ್ಲ್ಯಾಕ್ ಸ್ವೆಲ್
272 ಪುಟ ಐಎಸ್ ಬಿಎನ್: 978-1-4051-5155-9

*
ಕೇಟ್ ಕೇನ್ ಅವರ `ಓದುವಿಕೆಯ ಬೆಳವಣಿಗೆ ಮತ್ತು ಅದರಲ್ಲಿನ ತೊಂದರೆಗಳು' ಓದುವಿಕೆಯನ್ನು ಬೆಳೆಸುವುದರ ಕುರಿತು ಅಮೂಲ್ಯವಾದ ಮಾಹಿತಿಯನ್ನು ಹೊಂದಿರುವ ಒಂದು ಉಪಯುಕ್ತ ಪುಸ್ತಕ. ಬಹುಪಾಲು ಮಕ್ಕಳು ಓದುವುದರಲ್ಲಿ ತೊಂದರೆಗಳನ್ನು ಎದುರಿಸುತ್ತಿರುವುದರಿಂದ, ಓದುವುದನ್ನು ಕಲಿಸುವುದರ ಕುರಿತು ಈ ಪುಸ್ತಕದಲ್ಲಿ ಗಣನೀಯವಾಗಿ ಗಮನ ನೀಡಲಾಗಿದೆ. ಮನೋವಿಜ್ಞಾನ ಸಂಶೋಧಕರಿಗೆ, ಶಿಕ್ಷಣ, ಮಾತು ಮತ್ತು ಭಾಷಾ ಚಿಕಿತ್ಸೆಯಂಥ ಆನ್ವಯಿಕ ಸನ್ನಿವೇಶಗಳಲ್ಲಿ ಕೆಲಸ ಮಾಡುತ್ತಿರುವವರಿಗೆ ಈ ಪುಸ್ತಕವು ತುಂಬ ಉಪಯುಕ್ತವಾಗಿದೆ. ಓದುವಿಕೆಯ ಮನೋವಿಜ್ಞಾನದ ಸೀಮಿತ ತಿಳಿವಳಿಕೆಯ ಹಿನ್ನೆಲೆಯುಳ್ಳ ಮತ್ತು ಸಾಕ್ಷರತೆ ಗಳಿಸುವುದನ್ನು ಅರ್ಥಮಾಡಿಕೊಳ್ಳಬಯಸುವ ಓದುಗರಿಗೂ ಸೂಕ್ತವಾದ ಗ್ರಂಥ ಇದಾಗಿದೆ.

ಸಾಮಾನ್ಯವಾಗಿ ಬೇರೆ ಬೇರೆ ಎಂದೇ ತಿಳಿಯಲಾಗುತ್ತಿರುವ 'ಪದ ಓದುವಿಕೆ' ಮತ್ತು 'ಗ್ರಹಿಸುವಿಕೆಯ ಬೆಳವಣಿಗೆ' ಈ ಎರಡೂ ವಿಷಯಗಳ ಕುರಿತ ಸಂಶೋಧನೆಯನ್ನು ಒಟ್ಟಿಗೆ ತಂದು, ಓದುವಿಕೆಯ ಬೆಳವಣಿಗೆ ಮತ್ತು ತೊಂದರೆಗಳ ಕುರಿತು ಸಮಗ್ರವಾದ ಹಾಗೂ ವಿವರವಾದ ಪರಿಚಯಾತ್ಮಕ ಪರ್ಯವನ್ನು ಈ ಪುಸ್ತಕ ಒದಗಿಸುತ್ತದೆ.

ಪುಸ್ತಕದ ಪ್ರಮುಖ ವೈಶಿಷ್ಟ್ಯಗಳು ಹೀಗಿವೆ:

ಓದುವಿಕೆಗೆ ಸಂಬಂಧಿಸಿದ ಸಂಶೋಧನೆಯಲ್ಲಿ ಗುರುತಿಸಲಾಗಿರುವ ಸಮಸ್ಯೆಗಳು, 'ಪದ ಓದುವಿಕೆ' ಹಾಗೂ 'ಪಠ್ಯ ಅರ್ಥಮಾಡಿಕೊಳ್ಳುವಿಕೆ' ಇವುಗಳಲ್ಲಿ ಅಡಕವಾಗಿರುವ ಕೌಶಲ್ಯಗಳನ್ನು ಆರಂಭಿಕ ಓದುಗರು ಮತ್ತು ನುರಿತ ಓದುಗರು - ಈ ಇಬ್ಬರ ದೃಷ್ಟಿಕೋನಗಳಿಂದಲೂ ಈ ಪುಸ್ತಕವು ಪರಿಚಯಿಸುತ್ತದೆ. ಲಿಖಿತ ಮತ್ತು ಮಾತನಾಡುವ ಭಾಷೆಯ ನಡುವಿನ ಸಾಮ್ಯತೆಗಳು - ವ್ಯತ್ಯಾಸಗಳು ಹಾಗೂ ಈ ಕ್ಷೇತ್ರದಲ್ಲಿನ ವಿಭಿನ್ನ ವೈಧಾನಿಕ ಧೋರಣೆಗಳ ಅನುಕೂಲಗಳು - ಅನಾನುಕೂಲಗಳನ್ನು ಈ ಪುಸ್ತಕವು ವಿವರಿಸುತ್ತದೆ. ಓದುವುದನ್ನು ಅರ್ಥಮಾಡಿಕೊಳ್ಳುವ ಕೌಶಲಗಳನ್ನು ಬೆಳೆಸಿಕೊಳ್ಳುವಲ್ಲಿ ವಿಫಲವಾದರೆ ತೊಂದರೆಗಳು ಮತ್ತು ಅವ್ಯವಸ್ಥೆಗಳು ಹೇಗೆ ಹುಟ್ಟಿಕೊಳ್ಳುತ್ತವೆ ಎಂಬುದನ್ನು ಈ ಪುಸ್ತಕವು ಪರಿಶೋಧಿಸುತ್ತದೆ. ಓದುವುದನ್ನು ಕಲಿಸುವ ಮತ್ತು ಓದುವಿಕೆಯಲ್ಲಿನ ತೊಂದರೆಗಳ ಕುರಿತ ಸಂಶೋಧನೆಯ ನಿಹಿತಾರ್ಥಗಳ ವಿವರಣೆಯನ್ನು ಸಹ ಕೇನ್ ಅವರ ಈ ಪುಸ್ತಕವು ಒದಗಿಸುತ್ತದೆ.

ಓದುವಿಕೆಯಲ್ಲಿ ಬೇರೂರಿರುವ ತೊಂದರೆಗಳ ಕುರಿತು ಓದುಗರು ಆಳವಾದ ತಿಳಿವಳಿಕೆಯನ್ನು ನಿಖರವಾಗಿ ಪಡೆಯುವಂತೆ ಮಾಡಲು ಗುಣಾತ್ಮಕ ವೈಜ್ಞಾನಿಕ ಸಾಕ್ಷ್ಯಾಧಾರ ಮತ್ತು ತೀಕ್ಷ್ಣ ವಿಶ್ಲೇಷಣೆಗಳ ಹಿನ್ನೆಲೆಯಲ್ಲಿ, ಅತ್ಯಂತ ಹೆಚ್ಚಿನ ಸ್ಪಷ್ಟತೆಯೊಂದಿಗೆ ಸಂಕೀರ್ಣವಾದ ವಿಷಯವನ್ನು ಕೇನ್ ಅವರು ಪ್ರಸ್ತುತಪಡಿಸುತ್ತಾರೆ. ಮಕ್ಕಳು ಒಂದೊಂದು ಪದದ ಅರ್ಥ ತಿಳಿಯುವುದನ್ನು, ಅನಂತರ ಇಡೀ ವಾಕ್ಯ ಓದುವುದನ್ನು ಹೇಗೆ ಕಲಿಯುತ್ತಾರೆ, ಹಾಗೂ ತಕ್ಕಮಟ್ಟಿಗೆ ಸಂಕೀರ್ಣವಾದ ಪಠ್ಯಗಳಲ್ಲಿನ ಹಲವು ವಾಕ್ಯಗಳಲ್ಲಿನ ಅರ್ಥದ ಸಹ-ಸಂಬಂಧವನ್ನು ಕ್ರಮೇಣ ಹೇಗೆ ಗುರುತಿಸಿಕೊಳ್ಳುತ್ತಾರೆ ಎಂಬುದರ ಕುರಿತು ಲೇಖಕಿ ಪ್ರಾತ್ಯಕ್ಷಿಕೆ ನೀಡುತ್ತಾರೆ. ಮಗುವೊಂದು ಒಬ್ಬ ನುರಿತ ಓದುಗನಾಗಿ ರೂಪುಗೊಳ್ಳುವ ಪ್ರಕ್ರಿಯೆಗೆ , 'ಪದಗಳನ್ನು ಓದುವ ಕೌಶಲದ ಬೆಳವಣಿಗೆ' ಮತ್ತು 'ಪಠ್ಯದ ಒಟ್ಟಾರೆ ಅರ್ಥವನ್ನು ಹೆಕ್ಕಿತೆಗೆಯುವ ಸಾಮರ್ಥ್ಯ' ಎಂಬ ಎರಡು ಮುಖಗಳಿರುತ್ತವೆ ಎಂಬುದನ್ನು ಈ ಪುಸ್ತಕವು ಅನಾವರಣಗೊಳಿಸುತ್ತದೆ. ಸಾಕ್ಷರತೆಯನ್ನು ಗಳಿಸಿಕೊಳ್ಳುವ ಸಮಯದಲ್ಲಿ ಬಿಕ್ಕಟ್ಟುಗಳನ್ನು ಎದುರಿಸುತ್ತಿರುವ ಮಕ್ಕಳೊಂದಿಗೆ ಕೆಲಸ ಮಾಡುವ ಶಿಕ್ಷಕರು ಮತ್ತು ಶಿಕ್ಷಣ ತಜ್ಞರು ಸಾಕಷ್ಟು ಗಮನ ಕೊಡದೇ ಇರುವ ಓದುವಿಕೆಯ ಆಯಾಮವಾದ 'ಪದಗಳನ್ನು ಓದುವ' ಮತ್ತು 'ಪದಗಳನ್ನು

ಗುರುತಿಸುವ' ಅಂಶಗಳನ್ನು ಲೇಖಕಿ ಕೂಲಂಕಷವಾಗಿ ಪುಸ್ತಕದ ಮೊದಲ ಅಧ್ಯಾಯದಲ್ಲಿ ಅಧ್ಯಯನ ಮಾಡುತ್ತಾರೆ.

ಈ ಪುಸ್ತಕದಲ್ಲಿ ಸುದೀರ್ಘವಾಗಿ ಚರ್ಚಿತವಾಗಿರುವ ಇನ್ನೊಂದು ವಿಷಯವೆಂದರೆ 'ದೃಷ್ಟಿ' ಮತ್ತು 'ಪದ ಓದುವಿಕೆ' (sight and word reading). ಇವೆರಡೂ ಮುಖ್ಯವಾಗಿ ಪ್ರಾಥಮಿಕ ಶಾಲಾ ಶಿಕ್ಷಣದಲ್ಲಿ ಶಿಕ್ಷಕರು ಹೆಚ್ಚಾಗಿ ಗಮನಿಸದೇ ಇರುವ ಸಂಗತಿಗಳು. ಇನ್ನೂ ಮುಂದುವರೆದು ಲೇಖಕಿ ನೆನಪಿನಶಕ್ತಿ ಕುರಿತು ಚಿಂತನೆ ನಡೆಸಿದ್ದು, ಸ್ಥಳೀಯ ಹಾಗೂ ಜಾಗತಿಕ ಸುಸಂಬದ್ಧತೆ ಮತ್ತು ಪಠ್ಯವನ್ನು ಪ್ರತಿನಿಧಿಸುವ ವಿವಿಧ ಮಾದರಿಗಳ ಕುರಿತೂ ಆಳವಾದ ಒಳನೋಟವುಳ್ಳ ಚರ್ಚೆಗಳನ್ನು ಒದಗಿಸುತ್ತಾರೆ. 5ನೇ ಅಧ್ಯಯದಲ್ಲಿ ಓದುವಿಕೆ ಮತ್ತು ಆಲಿಸುವಿಕೆಗಳ ನಡುವಿನ ಸಂಬಂಧದ ಕುರಿತು ಮಾತನಾಡುತ್ತಾರೆ. ಅಧ್ಯಾಯ 6ರಲ್ಲಿ ಡಿಸ್ಲೆಕ್ಸಿಯಾದ ಲಕ್ಷಣಗಳು, ಪ್ರಕಾರಗಳು ಮತ್ತು ತತ್ಸಂಬಂಧಿ ಸಿದ್ಧಾಂತಗಳನ್ನು ವಿವರಿಸುತ್ತಾರೆ. 8ನೇ ಅಧ್ಯಾಯದಲ್ಲಿ ಓದುವುದರಲ್ಲಿ ತೊಂದರೆಗಳನ್ನು ಅನುಭವಿಸುತ್ತಿರುವವರಿಗೆ ಕಲಿಕಾ ಮಾರ್ಗೋಪಾಯಗಳು ಮತ್ತು ಸಲಹೆಯನ್ನು ಚರ್ಚಿಸಲಾಗಿದೆ. ಪ್ರಾಥಮಿಕ ಶಿಕ್ಷಣದಲ್ಲಿ ಕೆಲಸ ಮಾಡುತ್ತಿರುವವರಿಗೆ ಸಲಹೆ ಒದಗಿಸುವುದರೊಂದಿಗೆ ಪುಸ್ತಕವು ಮುಕ್ತಾಯವಾಗಿರುವುದು ಓದುವ ಕೌಶಲಗಳು ಮತ್ತು ಸಾಮರ್ಥ್ಯದ ಮಹತ್ವವನ್ನು ಎತ್ತಿಹಿಡಿಯುತ್ತಿದೆ.

*

**ರಾಜೇಶ್ ಕುಮಾರ್** ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಟೆಕ್ನಾಲಾಜಿ, ಚೆನ್ನೈ – ಇಲ್ಲಿ ಮಾನವಿಕ ಮತ್ತು ಸಮಾಜ ವಿಜ್ಞಾನ ವಿಭಾಗದಲ್ಲಿ ಭಾಷಾವಿಜ್ಞಾನವನ್ನು ಬೋಧಿಸುತ್ತಾರೆ.

*thisisrajkumar@gmail.com*

**ಚಿಂತನಾತ್ಮಕ ಪ್ರಶ್ನೆಗಳು:**

1. "ಮಕ್ಕಳು ಪದದ ಅರ್ಥ ತಿಳಿಯುವುದು, ಅನಂತರ ಇಡೀ ವಾಕ್ಯ ಓದುವುದು ಹಾಗೂ ಸಂಕೀರ್ಣವಾದ ಪಠ್ಯಗಳಲ್ಲಿನ ವಾಕ್ಯಗಳಲ್ಲಿನ ಅರ್ಥದ ಸಹ-ಸಂಬಂಧವನ್ನು ಗುರುತಿಸುವುದು – ಹೀಗೆ ಹಂತಹಂತವಾಗಿ ಓದುವ ಕೌಶಲ್ಯವನ್ನು ಬೆಳೆಸಿಕೊಳ್ಳುತ್ತಾರೆ". ಈ ಹೇಳಿಕೆಯನ್ನು ಮಕ್ಕಳೊಂದಿಗಿನ ನಿಮ್ಮ ಒಡನಾಟದ ಹಿನ್ನೆಲೆಯಲ್ಲಿ ವಿಶ್ಲೇಷಿಸಿ.

2. ಲಿಖಿತ ಮತ್ತು ಮಾತನಾಡುವ ಭಾಷೆ; ಆಲಿಸುವಿಕೆ ಮತ್ತು ಓದುವಿಕೆ – ಇವುಗಳ ನಡುವಿನ ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು ಚರ್ಚಿಸಿ.

